# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1373 |
| 2 | ಸದಸ್ಯರ ಹೆಸರು | : | ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 23-09-2021 |
| 4 | ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರದ ಅನೇಕ ಕಡೆಗಳಲ್ಲಿ ತ್ಯಾಜ್ಯ ವಿಲೇವಾರಿ ಸರಿಯಾಗಿ ಆಗದೆ ರಸ್ತೆ ಮತ್ತು ಖಾಲಿ ಜಾಗಗಳಲ್ಲಿ ಕಲುಷಿತ ವಾತಾವರಣ ನಿರ್ಮಾಣವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ವ್ಯವಸ್ಥಿತ ಹಾಗೂ ವೈಜ್ಞಾನಿಕ ಘನತ್ಯಾಜ್ಯ. ವಿಲೇವಾರಿಗೆ ಕ್ರಮ ಕೈಗೊಳ್ಳಲಾಗುತ್ತಿದೆ. ಬಹುತೇಕ ಬೆಳಿಗ್ಗೆ 6.30 ಗಂಟೆಯಿಂದ ಮಧ್ಯಾಹ್ನ 2.30 ಗಂಟೆವರೆಗೆ ತ್ಯಾಜ್ಯವನ್ನು ಮನೆಮನೆಗಳಿಂದ ಹಾಗೂ ವಾಣಿಜ್ಯ ಪ್ರದೇಶಗಳಿಂದ ಸಂಗ್ರಹಿಸಿ ವಿಲೇವಾರಿ ಮಾಡಲಾಗುತ್ತಿದೆ. ಪಾದಚಾರಿಗಳಿಂದ ಉಂಟಾಗುವ ತ್ಯಾಜ್ಯವನ್ನು ಸಂಗ್ರಹಣೆ ಮಾಡಲು ರಸ್ತೆಗಳಲ್ಲಿ ಲಿಟ್ಟರ್ ಬಿನ್‌ಗಳನ್ನೂ ಸಹ ಅಳವಡಿಸಲಾಗಿರುತ್ತದೆ.<br><br>ಆದಾಗ್ಯೂ ಸಹ ಕೆಲವು ಸಾರ್ವಜನಿಕರು / ಪಾದಚಾರಿಗಳು ತ್ಯಾಜ್ಯವನ್ನು ರಸ್ತೆ ಬದಿಗಳಲ್ಲಿ, ಖಾಲಿ ನಿವೇಶನಗಳಲ್ಲಿ ವಿಲೇವಾರಿ ಮಾಡುತ್ತಿದ್ದು, ಇಂತಹ ತ್ಯಾಜ್ಯವನ್ನು ದಿನನಿತ್ಯ ವಿಲೇವಾರಿ ಮಾಡಲು ಕ್ರಮ ವಹಿಸಲಾಗುತ್ತಿದೆ. ಇಂತಹ ಸಾರ್ವಜನಿಕರಿಗೆ ಪಾಲಿಕೆಯ ಆರೋಗ್ಯ ಪರಿವೀಕ್ಷಕರು ಮತ್ತು ಮಾರ್ಷಲ್‌ಗಳ ಮೂಲಕ ದಂಡ ವಿಧಿಸಲು ಸಹ ಕ್ರಮ ವಹಿಸಲಾಗಿರುತ್ತದೆ. |
| ಆ | ಕಸ ವಿಲೇವಾರಿ ಮತ್ತು ಸ್ವಚ್ಛತೆಯ ಜವಾಬ್ದಾರಿ ನಿರ್ವಹಿಸುತ್ತಿರುವ ಅಧಿಕಾರಿಗಳು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಎಷ್ಟು ಜನ ಇದ್ದಾರೆ; ಅವರ ಕರ್ತವ್ಯಗಳೇನು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಸ ವಿಲೇವಾರಿ ಮತ್ತು ಸ್ವಚ್ಛತೆಯ ಜವಾಬ್ದಾರಿ ನಿರ್ವಹಿಸಲು ವಿಶೇಷ ಆಯುಕ್ತರು (ಘನತ್ಯಾಜ್ಯ ನಿರ್ವಹಣೆ) ರವರ ಅಧೀನದಲ್ಲಿ ಸುಮಾರು 51 ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಸದರಿ ಅಧಿಕಾರಿಗಳು ಘನತ್ಯಾಜ್ಯ ಸಂಗ್ರಹಣೆ, ಸಾಗಾಣಿಕೆ, ರಸ್ತೆ ಗುಡಿಸುವಿಕೆ, ಸಂಸ್ಕರಣೆ, ವೈಜ್ಞಾನಿಕ ಭೂಭರ್ತಿ ಮತ್ತು ವಿಲೇವಾರಿ ಕಾರ್ಯಗಳನ್ನು ಮೇಲುಸ್ತುವಾರಿ ಮಾಡುತ್ತಿದ್ದಾರೆ. ಮುಂದುವರೆದು, ಘನತ್ಯಾಜ್ಯವನ್ನು ಸಮರ್ಪಕವಾಗಿ ವಿಲೇವಾರಿ ಕಾರ್ಯಗಳನ್ನು ಹೊಸದಾಗಿ ಕಾರ್ಯ ರೂಪಕ್ಕೆ ತರುವುದು, ದೈನಂದಿನ ಆಡಳಿತಾತ್ಮಕ ಮತ್ತು ತಾಂತ್ರಿಕ ಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. |

| | | |
|---|---|---|
| ಇ | ಹೆಲ್ತ್ ಇನ್ಸ್‌ಪೆಕ್ಟರ್‌ಗಳು ಆಯಾ ಬಡಾವಣೆಗಳಲ್ಲಿ ತಪಾಸಣೆ ಮಾಡಿ ಮೇಲಾಧಿಕಾರಿಗಳ ಗಮನಕ್ಕೆ ತಂದು ಸ್ವಚ್ಚತೆಯನ್ನು ಕಾಪಾಡಲು ನಿರ್ದೇಶನ ನೀಡುತ್ತಿರುವರೇ; ಕರೋನ ಭಯವಿರುವ ಈ ಸಂದರ್ಭದಲ್ಲಿ ಆರೋಗ್ಯಾಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಿ ಮಲೀನ ವಾತಾವರಣ ನಿರ್ಮಾಣವಾಗದಂತೆ ಕ್ರಮ ಕೈಗೊಳ್ಳಲು ನಿರ್ದೇಶನ ನೀಡಲಾಗಿದೆಯೇ? | ಹೌದು. ಹೆಲ್ತ್ ಇನ್ಸ್‌ಪೆಕ್ಟರ್‌ಗಳು ಆಯಾ ಬಡಾವಣೆಗಳಲ್ಲಿ ತಪಾಸಣೆ ಮಾಡಿ ಮೇಲಾಧಿಕಾರಿಗಳ ಗಮನಕ್ಕೆ ತಂದು ಸ್ವಚ್ಚತೆಯನ್ನು ಕಾಪಾಡಲು ನಿರ್ದೇಶನ ನೀಡುತ್ತಿದ್ದಾರೆ.<br><br>ಮುಂದುವರೆದು, ಕೋವಿಡ್-19 ಸಾಂಕ್ರಾಮಿಕ ರೋಗದ ಭಯವಿರುವ ಈ ಸಂದರ್ಭದಲ್ಲಿ ಘನತ್ಯಾಜ್ಯ ವಿಲೇವಾರಿಯಲ್ಲಿ ಮುಂಚೂಣಿ ಯೋಧರಾಗಿ ಕಾರ್ಯನಿರ್ವಹಿಸುತ್ತಿರುವ ಪೌರಕಾರ್ಮಿಕರು, ವಾಹನ ಚಾಲಕರು ಮತ್ತು ಸಹಾಯಕರು ಮೊದಲಾದವರಿಗೆ ಸೂಕ್ತ ರಕ್ಷಣಾ ಕವಚಗಳನ್ನು ಒದಗಿಸಿ ಸದರಿ ಸಿಬ್ಬಂದಿಗಳಿಗೆ ಮಲೀನ ವಾತಾವರಣ ಉಂಟಾಗದಂತೆ ಕ್ರಮ ವಹಿಸಲು ನಿರ್ದೇಶನ / ಸೂಚನೆಗಳನ್ನು ನೀಡಲಾಗಿರುತ್ತದೆ. ಆರೋಗ್ಯಾಧಿಕಾರಿಗಳಿಗೆ ಈ ಮುಂಚೂಣಿ ಯೋಧರುಗಳಿಗೆ ಆರೋಗ್ಯ ತಪಾಸಣೆ ಇತ್ಯಾದಿ ಕಾರ್ಯಗಳನ್ನು ನಿರಂತರವಾಗಿ ಹಮ್ಮಿಕೊಳ್ಳಲು ಸಹ ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. |

**ಸಂಖ್ಯೆ: ನಅಇ 276 ಎಂಎನ್‌ವೈ 2021 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ